# ಕರ್ನಾಟಕ ವಿಧಾನ ಪರಿಷತ್

ಮಾನ್ಯ ವಿಧಾನ ಪರಿಷತ್ ಸದಸ್ಯರ ಹೆಸರು : **ಶ್ರೀ ನಸೀರ್ ಅಹ್ಮದ್**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : **1081**

ಉತ್ತರಿಸಬೇಕಾದ ದಿನಾಂಕ : 29.09.2020

ಉತ್ತರಿಸಬೇಕಾದ ಸಚಿವರು : ಸಹಕಾರ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಜನಸೇವೆಯ ಹೆಸರಿನಲ್ಲಿ ಗೃಹ ನಿರ್ಮಾಣ ಸಹಕಾರ ಸಂಘಗಳನ್ನು ನಿರ್ಮಿಸಿಕೊಂಡು ಅಮಾಯಕ ಜನರಿಂದ ಹಣವನ್ನು ವಸೂಲು ಮಾಡಿ ಮೋಸ-ವಂಚನೆ ಮಾಡುತ್ತಿರುವ ಎಷ್ಟು ಪ್ರಕರಣಗಳನ್ನು ಗುರುತಿಸಿ ಕ್ರಮ ಜರುಗಿಸಲಾಗಿದೆ; | ಜನಸೇವೆಯ ಹೆಸರಿನಲ್ಲಿ ಗೃಹ ನಿರ್ಮಾಣ ಸಹಕಾರ ಸಂಘಗಳನ್ನು ನಿರ್ಮಿಸಿಕೊಂಡು ಅಮಾಯಕ ಜನರಿಂದ ಹಣವನ್ನು ವಸೂಲು ಮಾಡಿ ಮೋಸ-ವಂಚನೆ ಮಾಡುತ್ತಿರುವ ಪ್ರಕರಣಗಳು ಇರುವುದಿಲ್ಲ. |
| ಆ) | ಗೃಹ ನಿರ್ಮಾಣ ಸಹಕಾರ ಸಂಘಗಳನ್ನು ಸ್ಥಾಪಿಸುವಾಗ ಅನುಸರಿಸಬೇಕಾದ ನೀತಿ ನಿಯಮಗಳು ಯಾವುವು; | ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ರ ನಿಯಮ 3 ರಂತೆ ನೋಂದಣಿಯ ರೀತ್ಯಾ ಹೊಸದಾಗಿ ಗೃಹ ನಿರ್ಮಾಣ ಸಹಕಾರ ಸಂಘಗಳನ್ನು ಸ್ಥಾಪಿಸಲು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 6 ರಂತೆ ನೋಂದಣಿಗಾಗಿ ಅರ್ಜಿ ಸಲ್ಲಿಸಿದ ನಂತರ ನಿಯಮಾನುಸಾರ ಪರಿಶೀಲಿಸಿ ಸಾಧ್ಯತಾ ವರದಿಯನ್ನು ಪಡೆದು ಕಾರ್ಯವ್ಯಾಪ್ತಿಯನ್ನಾಧರಿಸಿ ಹಾಗೂ ಗೃಹ ನಿರ್ಮಾಣ ಸಹಕಾರ ಸಂಘಗಳ ನೋಂದಣಿಗೆ ಸಂಬಂಧಪಟ್ಟಂತೆ ಸಹಕಾರ ಸಂಘಗಳ ನಿಬಂಧಕರ ಸುತ್ತೋಲೆ ಸಂ:ಆರ್‌ಎಸ್‌ಆರ್/226/ಎಕ್ಸ್‌ಎಂಸಿ/2007-08, ದಿ:29.03.2008 ಮತ್ತು ಹೆಚ್‌ಎಸ್‌ಜಿ-3/26/ಹೆಚ್‌ಹೆಚ್‌ಎಸ್/2019-20 (ಭಾಗ-2) ದಿ:03/02/2020 ರಲ್ಲಿ ನೀಡಿರುವ ಮಾರ್ಗಸೂಚಿಗಳನ್ನು ಅನುಸರಿಸಿ ಷೇರು ಹಣ ಸಂಗ್ರಹಣೆಗೆ ಅನುಮತಿ ನೀಡಿ, ಅನುಮತಿಯ ಷರತ್ತುಗಳನ್ನು ಪೂರೈಸಿದ ನಂತರ ಸಹಕಾರ ಸಂಘಗಳ ಕಾಯ್ದೆ ಕಲಂ 7 ರಂತೆ ಗೃಹ ನಿರ್ಮಾಣ ಸಹಕಾರ ಸಂಘಗಳನ್ನು ನೋಂದಾಯಿಸಬೇಕಾಗಿರುತ್ತದೆ. |
| ಇ) | ಸದಸ್ಯರುಗಳು ಪಾತಿಸಿದ ಹಣಕ್ಕೆ ಯಾವ ರೀತಿಯ ಖಾತರಿ ಇರಬೇಕೆಂಬುದನ್ನು ಇಲಾಖೆ ಜಾರಿಯಲ್ಲಿರಿಸಿದೆ ? | ಗೃಹ ನಿರ್ಮಾಣ ಸಹಕಾರ ಸಂಘಗಳನ್ನು ಇಚ್ಛೆಯುಳ್ಳ ಜನರು ಒಟ್ಟಾಗಿ ಸೇರಿ ಸ್ಥಾಪಿಸಿಕೊಳ್ಳುವ ಸಹಕಾರ ಸಂಘಗಳಾಗಿರುತ್ತವೆ. ಸ್ಥಾಪಿಸಿಕೊಳ್ಳುವ ಜನರೇ ಸಂಘದ ಸದಸ್ಯರಾಗುತ್ತಾರೆ ಹಾಗೂ ಸಂಘದ ಸದಸ್ಯರು ಸೇರಿ ಪದಾಧಿಕಾರಿಗಳನ್ನು ಆಯ್ಕೆ ಮಾಡಲ ಪ್ರಕ್ರಿಯೆ ಇದ್ದು, ಅವರುಗಳು ಪಾವತಿಸುವ ಹಣಕ್ಕೆ ಯಾವ ರೀತಿಯ ಖಾತರಿ ಅನುಸರಿಸಬೇಕು ಎಂಬುದನ್ನು ಕಾಲಕಾಲಕ್ಕೆ ನಡೆಯುವ ಆಡಳಿತ ಮಂಡಳಿ ಸಭೆಗಳು ಮತ್ತು ವಾರ್ಷಿಕ ಸರ್ವಸದಸ್ಯರ ಮಹಾ ಸಭೆಗಳಲ್ಲಿ ನಿರ್ಣಯ ಕೈಗೊಂಡು ಅವುಗಳನ್ನು ಪಾಲಿಸಬೇಕಾಗಿದೆ. ಈ ಬಗ್ಗೆ ಇಲಾಖೆಯಿಂದ ಖಾತರಿ ನೀಡುವ ಕ್ರಮ ಇರುವುದಿಲ್ಲ. |

**ಸಂಖ್ಯೆ:ಸಿಒ 44 ಸಿಹೆಚ್‌ಎಸ್ 2020 (ಇ)**

**(ಎಸ್.ಟಿ.ಸೋಮಶೇಖರ್)**
ಸಹಕಾರ ಸಚಿವರು